ವ್ಸೇವೊಲೊದ್
ಗಾರ್ಶಿನ್



# ಕಪ್ಪೆಯ ಪಯಣ



ವ್ಸೇವೊಲೊದ್
# ಗಾರ್ಷಿನ್

# ಕಪ್ಪೆಯ ಪಯಣ

ಅನುವಾದ: ಕೆ. ಎಲ್. ಗೋಪಾಲಕೃಷ್ಣರಾವ್

ಚಿತ್ರಗಳು: ನಿಕೀತ ಚರೂಷಿನ್



ರಾದುಗ ಪ್ರಕಾಶನ
ಮಾಸ್ಕೋ

ಒಂದಾನೊಂದು ಕಾಲದಲ್ಲಿ ಒಂದು ಕಪ್ಪೆ ಇತ್ತು. ಅದು ಒಂದು ಜೌಗು ಪ್ರದೇಶದಲ್ಲಿ ವಾಸಿಸುತ್ತಿತ್ತು, ಅಲ್ಲಿ ಸೊಳ್ಳೆ ನೊಣಗಳನ್ನು ಹಿಡಿದು ತಿನ್ನುತ್ತ ಹೊಟ್ಟೆ ಹೊರೆದುಕೊಳ್ಳುತ್ತಿತ್ತು. ವಸಂತ ಕಾಲದಲ್ಲಿ ಉಳಿದೆಲ್ಲ ಕಪ್ಪೆಗಳೊಡನೆ ಕೂಡಿಕೊಂಡು ಅದು ಗಟ್ಟಿಯಾಗಿ ವಟಗುಟ್ಟುತ್ತಿತ್ತು. ಅದು ಅಲ್ಲೇ ತನ್ನ ಜೀವಮಾನ ಪೂರ್ತಿ ಸುಖವಾಗಿ ಇರಲಿದ್ದಿತು – ಅಂದರೆ ಅದನ್ನು ಯಾವುದಾದರೂ ಕೊಕ್ಕರೆ ಬಂದು ತಿನ್ನದೆ ಇದ್ದರೆ, ಅನ್ನಿ.

ಆದರೆ ಒಂದು ದಿನ ಒಂದು ವಿಚಿತ್ರ ಘಟನೆ ಜರುಗಿತು. ಆ ಘಟನೆ ಅದರ ಜೀವನವನ್ನೆಲ್ಲ ಏರುಪೇರು ಮಾಡಿತು.

ಅಂದು ಅದು ನೀರಿನ ಮೇಲೆ ಹೊರಟುಕೊಂಡಿದ್ದ ಕೋಚು ಬಂಡೆಯೊಂದರ ತುದಿಯ ಮೇಲೆ ಕುಳಿತು, ಬೆಚ್ಚಗಿನ ತುಂತುರು ಮಳೆಗೆ ಮೈ ಒಡ್ಡಿ ಆನಂದಿಸುತ್ತಿತ್ತು.

"ಆಹ್, ಇವತ್ತು ಹವ ಎಷ್ಟು ಚೆನ್ನಾಗಿದೆ, ಈ ಮಳೆ ಎಷ್ಟು ಸೊಗಸಾಗಿದೆ ! ಜೀವನ ಅಂದರೆ ಹೀಗಿರಬೇಕು !" ಅಂತ ಅದು ಯೋಚಿಸುತ್ತಿತ್ತು.



ಮಳೆ ಅದರ ಚುಕ್ಕೆ ಚುಕ್ಕೆಯಾದ, ಹೊಳೆಯುತ್ತಿದ್ದ ಬೆನ್ನಿನ ಮೇಲೆ ಬೀಳುತ್ತಿತ್ತು. ಹನಿ ಅದರ ಹೊಟ್ಟೆಯ ಕೆಳಕ್ಕೂ ಕಾಲುಗಳ ಹಿಂಬದಿಗೂ ಹರಿದುಕೊಂಡು ಹೋಗುತ್ತ ಅದಕ್ಕೆ ಎಂತಹ ಅಮಿತಾನಂದವನ್ನು ಉಂಟುಮಾಡುತ್ತಿದ್ದಿತೆಂದರೆ, ಅದು ಸಂತೋಷದಿಂದ ಇನ್ನೇನು ವಟಗುಟ್ಟುವುದರಲ್ಲಿತ್ತು. ಆದರೆ ಅದು ಶರತ್ಕಾಲ,

ಕಪ್ಪೆಗಳು ಶರತ್ಕಾಲದಲ್ಲಿ ವಟಗುಟ್ಟುವುದಿಲ್ಲ, ವಸಂತ ಋತುವಿನಲ್ಲಷ್ಟೆ ವಟಗುಟ್ಟುವುದು, ಅನ್ನುವುದನ್ನು ಅದು ಅದೃಷ್ಟವಶಾತ್ ಸಕಾಲದಲ್ಲೇ ನೆನಪಿಗೆ ತಂದುಕೊಂಡಿತು. ಹಾಗಾಗಿ ಅದು ತನ್ನ ವಟಗುಟ್ಟುವ ಅಭಿಲಾಷೆಯನ್ನು ಹತ್ತಿಕ್ಕಿ ಮೌನದಿಂದಲೇ ಆನಂದವನ್ನು ಅನುಭವಿಸತೊಡಗಿತು.

ಆಗ ಇದ್ದಕ್ಕಿದ್ದಂತೆ ಅದಕ್ಕೆ ಮೇಲೆ ಎತ್ತರದಲ್ಲಿ ಒಂದು ರೀತಿಯ ಮೆತುವಾದ ಸಿಳ್ಳು ಸದ್ದು ಕೇಳಿಬಂತು. ಒಂದು ಜಾತಿಯ ಕಾಡು ಬಾತುಕೋಳಿಗಳಿರುತ್ತವೆ. ಅವು ಹಾರಿ ಹೋಗುವಾಗ ಅವುಗಳ ರೆಕ್ಕೆಗಳು ಗಾಳಿಯನ್ನು ಸೀಳುತ್ತ ಈ ರೀತಿಯ ಹಾಡುವ ಅಥವಾ ಸಿಳ್ಳುಹಾಕುವ ಸದ್ದು ಮಾಡುತ್ತವೆ. ಅವು ಸಾಮಾನ್ಯವಾಗಿ ತುಂಬ ಎತ್ತರದಲ್ಲಿ ಹಾರುತ್ತವೆ. ಅವು ಕಣ್ಣಿಗೆ ಕಾಣುವುದೇ ಇಲ್ಲ. ಆದರೆ ಈ ಶಬ್ದ ಕೇಳಿಯಷ್ಟೆ ಅವು ಅಲ್ಲಿವೆ ಎಂದು ತಿಳಿಯಬೇಕು. ಆದರೆ ಈ ಬಾರಿ ಈ ಬಾತುಕೋಳಿಗಳು ಕೆಳಕ್ಕಿಳಿದು ಬಂದವು. ಗಾಳಿಯಲ್ಲಿ ಸ್ವಲ್ಪ ಹೊತ್ತು ದೊಡ್ಡ ಅರೆವೃತ್ತಾಕಾರದಲ್ಲಿ ಸುತ್ತು ಹಾಕಿ ಕೊನೆಗೆ ಈ ಕಪ್ಪೆಯು ಮನೆ ಮಾಡಿಕೊಂಡಿದ್ದ ಜೌಗು ಪ್ರದೇಶದ ಮೇಲೆಯೇ ಬಂದಿಳಿದವು.

"ಕ್ವಾಕ್, ಕ್ವಾಕ್!" ಅವುಗಳಲ್ಲೊಂದು ಹೇಳಿತು. "ನಾವಿನ್ನೂ ತುಂಬ ದೂರ ಹೋಗಬೇಕಾಗಿದೆ. ಇಲ್ಲಿ ಏನನ್ನಾದರೂ ಸ್ವಲ್ಪ ತಿಂದು ಹೋಗುವುದು ಒಳ್ಳೆಯದು."

ಇದನ್ನು ಕೇಳಿ ಕಪ್ಪೆ ತಕ್ಷಣವೇ ನೀರಿನೊಳಕ್ಕೆ ಮುಳುಗಿತು. ತಾನೊಂದು ದೊಡ್ಡದಾದ, ದಪ್ಪನಾದ ಕಪ್ಪೆ; ಬಾತುಕೋಳಿಗಳು ತನ್ನನ್ನು ತಿನ್ನುವುದಿಲ್ಲ ಅನ್ನುವುದು ಅದಕ್ಕೆ ತಿಳಿದಿತ್ತು. ಆದರೂ ಕೋಚು ಬಂಡೆಯ ಕೆಳಗೆ ಅಡಗಿರುವುದೇ ಉತ್ತಮ ಅಂತ ಅದು ನಿರ್ಧರಿಸಿತು.

ಆದರೆ ಆ ಬಾತುಕೋಳಿಗಳು ಎಲ್ಲಿಗೆ ಹೊರಟಿದ್ದವು ಅನ್ನುವುದನ್ನು ತಿಳಿದುಕೊಳ್ಳಬೇಕೆಂದೂ ಅದಕ್ಕೆ ಕುತೂಹಲ. ಹಾಗಾಗಿ ಸ್ವಲ್ಪ ಹೊತ್ತು ಯೋಚಿಸಿದ ನಂತರ ಅದು ತನ್ನ ಉಬ್ಬು ಕಣ್ಣುಗಳ ಮುಖವನ್ನು ಧೈರ್ಯದಿಂದ ನೀರಿನಿಂದ ಹೊರ ತಂದಿತು.



"ಕ್ವಾಕ್, ಕ್ವಾಕ್!" ಇನ್ನೊಂದು ಬಾತುಕೋಳಿ ಹೇಳಿತು. "ಆಗಲೇ ಚಳಿಯಾಗತೊಡಗಿದೆ. ಬೇಗ ದಕ್ಷಿಣಕ್ಕೆ ಹಾರಿ ಹೋಗಬೇಕು!"

ಉಳಿದೆಲ್ಲ ಬಾತುಕೋಳಿಗಳೂ ಈ ಮಾತನ್ನು ಅನುಮೋದಿಸುವಂತೆ ಗಟ್ಟಿಯಾಗಿ ಕ್ವಾಕ್ ಕ್ವಾಕ್ ಅನ್ನ ತೊಡಗಿದವು.

"ಕ್ಷಮಿಸಿ ನನ್ನ ಮಾತಿಗೆ" ಅಂತ ಕಪ್ಪೆ ಅಂಜುತ್ತಂಜುತ್ತ ಹೇಳಿತು. "ಯಾವುದದು ದಕ್ಷಿಣ, ನೀವು ಹಾರಿ ಹೋಗುತ್ತಿರುವ ಆ ಸ್ಥಳ?"

ಬಾತುಕೋಳಿಗಳು ಕಪ್ಪೆಯ ಸುತ್ತ ಮುತ್ತಿಕೊಂಡವು. ಅವುಗಳಿಗೆ ಮೊದಲು ಅನಿಸಿದ್ದು ಅದನ್ನು ತಿಂದುಹಾಕ ಬೇಕು, ಅಂತ. ಆದರೆ ಅದು ತುಂಬ ದೊಡ್ಡ ಕಪ್ಪೆ, ತಿಂದರೆ ಗಂಟಲಲ್ಲೇ ಸಿಕ್ಕಿಕೊಳ್ಳುತ್ತೆ, ಅಂತ ಅವಕ್ಕೆ ತಕ್ಷಣವೇ ಹೊಳೆಯಿತು. ಅವು ತಮ್ಮ ರೆಕ್ಕೆಗಳನ್ನು ಬಡಿಯುತ್ತ ಗಟ್ಟಿಯಾಗಿ ಕೂಗಿ ಹೇಳಿದವು:

"ದಕ್ಷಿಣ ಬಹಳ ಸೊಗಸಾದ ಪ್ರದೇಶ! ಅಲ್ಲೀಗ ಬೆಚ್ಚಗಿರುತ್ತೆ. ಅಲ್ಲಿ ಎಷ್ಟೊಂದು ಚೆನ್ನಾದ ಬೆಚ್ಚಗಿನ ಜೌಗು ಪ್ರದೇಶಗಳು ಇರುತ್ತವೆ ಅಂತ! ಅವುಗಳಲ್ಲಿ ಎರೆಹುಳುಗಳೂ ದಪ್ಪದಪ್ಪನಾಗಿರುತ್ತವೆ! ಓಹ್, ದಕ್ಷಿಣದಲ್ಲಿ ಎಲ್ಲ ಎಷ್ಟು ಸೊಗಸಾಗಿರುತ್ತೆ!"

ಅವುಗಳೆಲ್ಲ ಎಷ್ಟು ಆನಂದದಿಂದ ಒಟ್ಟಿಗೇ ಗಟ್ಟಿಯಾಗಿ ಕೂಗಿ ಹೇಳಿದವೆಂದರೆ, ಕಪ್ಪೆಗೆ ಕಿವುಡಾಗು ವಂತಾಯಿತು. ಸ್ವಲ್ಪ ಸ್ವಲ್ಪವಾಗಿ ಅದು ಕೊನೆಗೆ ಅವೆಲ್ಲವನ್ನೂ ಮೌನವಾಗುವಂತೆ ಮಾಡುವುದರಲ್ಲಿ ಯಶಸ್ವಿಯಾಯಿತು. ಅವುಗಳಲ್ಲಿ ಇದ್ದದ್ದರಲ್ಲಿ ಸ್ವಲ್ಪ ವಿವೇಕಶಾಲಿ ಅಂತ ಕಂಡುಬಂದ ಒಂದು ಬಾತುಕೋಳಿಯನ್ನು ಕಪ್ಪೆ, ದಕ್ಷಿಣ ಅಂದರೆ ಏನು ಎಲ್ಲಿದೆ ಅನ್ನುವುದನ್ನು ತಿಳಿಸುವಂತೆ ಕೇಳಿಕೊಂಡಿತು.

ಅದು ಕಪ್ಪೆಗೆ ಎಲ್ಲವನ್ನೂ ವಿವರಿಸಿ ತಿಳಿಸಿದಾಗ, ಆ ಸ್ಥಳ ನಿಜಕ್ಕೂ ತುಂಬ ಅದ್ಭುತವಾದುದು ಅಂತ ಕಪ್ಪೆಗೆ ಅನಿಸಿತು. ಆದರೆ ಅದು ತುಂಬ ಹುಷಾರಿನ ಪ್ರಾಣಿ. ಖಚಿತಪಡಿಸಿಕೊಳ್ಳಲೋಸುಗ ಮತ್ತೆ ಕೇಳಿತು:

"ಅಲ್ಲಿ ನೊಣಗಳೂ ಸೊಳ್ಳೆಗಳೂ ತುಂಬ ಇವೆಯೇ?"

"ಓಹ್, ಬೇಕಾದಷ್ಟು. ಮೋಡಗಳಂತೆ ಮುತ್ತಿ ಕೊಂಡಿರುತ್ತವೆ!" ಬಾತುಕೋಳಿ ಹೇಳಿತು.

ಕಪ್ಪೆ ಒಮ್ಮೆ ವಟಗುಟ್ಟಿತು. ತಕ್ಷಣವೇ ಬೇಗನೆ ತಿರುಗಿ ನೋಡಿತು – ತಾನು ಶರತ್ಕಾಲದಲ್ಲಿ ವಟ ಗುಟ್ಟಿದುದನ್ನು ತನ್ನ ಮಿತ್ರರು ಯಾರಾದರೂ ಕೇಳಿಸಿಕೊಂಡು ಬಿಟ್ಟರೇ ಅನ್ನುವುದನ್ನು ಕಂಡು ಕೊಳ್ಳಲು. ಆದರೆ ಒಮ್ಮೆಯಾದರೂ ಸರಿ ವಟ ಗುಟ್ಟದೆ ಇರಲು ಅದಕ್ಕೆ ಸಾಧ್ಯವಾಗಲೇ ಇಲ್ಲ. "ನನ್ನನ್ನೂ ನಿಮ್ಮ ಜೊತೆ ಕರೆದುಕೊಂಡು ಹೋಗು ತ್ತೀರ" ಅದು ಬಾತುಕೋಳಿಗಳನ್ನು ಕೇಳಿಕೊಂಡಿತು.

"ಎಂತಹ ವಿಚಾರ ನಿನ್ನದು!" ಬಾತುಕೋಳಿಗಳು ಆಶ್ಚರ್ಯದಿಂದ ಹೇಳಿದವು. "ನಿನ್ನನ್ನು ಹೇಗೆ ಕರೆದು ಕೊಂಡು ಹೋಗುವುದು? ನಿನಗೆ ರೆಕ್ಕೆಗಳೇ ಇಲ್ಲ!"



"ಇರಲಿ. ನೀವು ಯಾವಾಗ ಹೊರಡುತ್ತೀರಿ?"

"ಈಗಲೇ, ಬೇಗನೆಯೇ" ಎಲ್ಲ ಬಾತುಕೋಳಿಗಳೂ ಒಟ್ಟಿಗೇ ಹೇಳಿದವು. "ಕ್ವಾಕ್-ಕ್ವಾಕ್-ಕ್ವಾಕ್-ಕ್ವಾಕ್! ಇಲ್ಲಾಗಲೇ ಚಳಿ ಶುರುವಾಗಿದೆ. ನಾವು ದಕ್ಷಿಣಕ್ಕೆ ಬೇಗ ಹೋಗಬೇಕು! ಬೇಗ ಹೋಗಬೇಕು!"

"ನನಗೆ ಐದು ನಿಮಿಷ ಸಮಯ ಕೊಡ್ತೀರಾ?" ಕಪ್ಪೆ ಕೇಳಿಕೊಂಡಿತು. "ಅಷ್ಟರಲ್ಲೇ ಹಿಂದಿರುಗಿ ಬರುತ್ತೇನೆ. ಏನಾದರೂ ಉಪಾಯ ಕಂಡುಹಿಡಿಯುತ್ತೇನೆ."

ಅದು ತಾನು ಹತ್ತಿ ಕುಳಿತಿದ್ದ ಕೋಚು ಬಂಡೆಯ ಮೇಲಿನಿಂದ ಕೆಸರಿನೊಳಕ್ಕೆ ಧುಮುಕಿ ಅದರಲ್ಲಿ ತನ್ನನ್ನು ಸಂಪೂರ್ಣವಾಗಿ ಮುಚ್ಚಿಕೊಂಡಿತು, ತಾನು ಚಿಂತಿಸುವಾಗ ಯಾವ ಅಡಚಣೆಯೂ ಬಾರದಿರಲೆಂದು. ಐದು ನಿಮಿಷ ಕಳೆಯಿತು. ಬಾತುಕೋಳಿಗಳು ಹಾರಿ ಹೋಗಲು ನಿರ್ಧರಿಸಿದವು. ಆ ಹೊತ್ತಿಗೆ ಸರಿಯಾಗಿ ಕಪ್ಪೆ ಕೋಚು ಬಂಡೆಯ ಬಳಿ ನೀರಿನಿಂದ ಮೇಲಕ್ಕೆ ಪುಳಕ್ಕನೆ ಬಂದಿತು. ಕಪ್ಪೆಯೊಂದರ ಮುಖ ಎಷ್ಟು ಕಾಂತಿಯನ್ನು ಸೂಸ ಬಲ್ಲುದೋ ಅಷ್ಟೂ ಕಾಂತಿಯನ್ನು ಸೂಸುತ್ತಿತ್ತು ಈ ಕಪ್ಪೆಯ ಮುಖ.

"ನನಗೊಂದು ಉಪಾಯ ಹೊಳೆದಿದೆ! ನಾನೊಂದು ಮಾರ್ಗ ಕಂಡುಹಿಡಿದಿದ್ದೇನೆ" ಅಂತ ಅದು ಹೇಳಿತು. "ನಿಮ್ಮಲ್ಲಿ ಇಬ್ಬರು ನಿಮ್ಮ ಕೊಕ್ಕುಗಳಲ್ಲಿ ಒಂದು ಕಡ್ಡಿಯನ್ನು ಹಿಡಿದುಕೊಳ್ಳಿ. ನಾನು ಮಧ್ಯದಲ್ಲಿ ಅದರಿಂದ ತೂಗಿಕೊಂಡಿರುತ್ತೇನೆ. ನೀವು ಹಾರಿ ಹೋದಾಗ ನಾನೂ ನಿಮ್ಮ ಜೊತೆ ಬರುತ್ತೇನೆ. ಆದರೆ ಮುಖ್ಯ ವಿಷಯ – ನೀವು ಹಾರಿ ಹೋಗುವಾಗ ಕ್ವಾಕ್ ಅನ್ನಬಾರದು, ನಾನೂ ವಟಗುಟ್ಟಬಾರದು, ಅಷ್ಟೆ. ಹಾಗಾದರೆ ಎಲ್ಲ ಸರಿ ಹೋಗುತ್ತೆ."

ಕಪ್ಪೆ ಎಷ್ಟೇ ಹಗುರವಾಗಿದ್ದರೂ ಅದನ್ನು ಸಾವಿರಾರು ಮೈಲಿ ಒಯ್ಯುವುದು, ಒಂದು ಸಾರಿಯೂ ಕ್ವಾಕ್ ಅನ್ನದಿರುವುದು, ಅಂತಹ ಸಂತಸದ ಸುಲಭದ ಕಾರ್ಯವಲ್ಲದಿದ್ದರೂ, ಕಪ್ಪೆಯ ಜಾಣತನವನ್ನು ಕಂಡು ಬಾತು ಕೋಳಿಗಳಿಗೆ ಎಷ್ಟು ಸಂತೋಷವಾಯಿತೆಂದರೆ ಅವೆಲ್ಲ ಅದನ್ನು ಕರೆದೊಯ್ಯಲು ಒಪ್ಪಿಕೊಂಡವು. ಪ್ರತಿ ಎರಡು ಗಂಟೆಗಳಿಗೊಮ್ಮೆ ಸರದಿ ಬದಲಾಯಿಸಿಕೊಳ್ಳಲು ನಿರ್ಧರಿಸಿದವು. ಅವು ತುಂಬ ಸಂಖ್ಯೆಯಲ್ಲಿದ್ದು ಕಪ್ಪೆ ಒಂದೇ



ಆಗಿದ್ದುದರಿಂದ ಸರದಿಯೂ ಬೇಗ ಬರುತ್ತಿರಲಿಲ್ಲ. ಅವು ಒಂದು ಒಳ್ಳೆಯ ಗಟ್ಟಿಯಾದ ಕಡ್ಡಿಯನ್ನು ಹುಡುಕಿ ತಂದವು. ಎರಡು ಬಾತುಕೋಳಿಗಳು ಕಡ್ಡಿಯ ಎರಡು ತುದಿಗಳನ್ನೂ ಕೊಕ್ಕುಗಳಲ್ಲಿ ಕಚ್ಚಿಹಿಡಿದವು. ಕಪ್ಪೆ ಬಾಯಿ ಯಿಂದ ಕಡ್ಡಿಯ ಮಧ್ಯದಲ್ಲಿ ಕಚ್ಚಿಕೊಂಡು ತೂಗುಬಿದ್ದಿತು. ಬಾತುಕೋಳಿಗಳ ಹಿಂಡು ಹಾರಿತು.

ಬಾತುಕೋಳಿಗಳು ತುಂಬ ಎತ್ತರದಲ್ಲಿ ಹಾರಿ ಹೋಗುತ್ತಿದ್ದುದರಿಂದ ಕಪ್ಪೆಗೆ ಉಸಿರು ಕಟ್ಟಿದಂತಾಯಿತು. ಅಲ್ಲದೆ ಅವು ಒಂದೇ ಸಾಲಿನಲ್ಲಿ ಸರಿಯಾಗಿ ಹಾರದೆ ಕಡ್ಡಿಯನ್ನು ಒಮ್ಮೊಮ್ಮೆ ಜಗ್ಗುತ್ತಿದ್ದವು. ಬಡಪಾಯಿ ಕಪ್ಪೆ ಗಾಳಿಯಲ್ಲಿ ಕಾಗದದ ಕೋಡಂಗಿಯಂತೆ ತೂಗಾಡುತ್ತಿತ್ತು. ಎಲ್ಲಿ ಸಡಿಲಗೊಂಡು ದೂರ ಕೆಳಕ್ಕೆ ನೆಲದ ಮೇಲೆ ದೊಪ್ಪನೆ ಬಿದ್ದು ಬಿಡುವೆನೋ ಅಂತ ಹೆದರಿ ಅದು ತನ್ನೆಲ್ಲ ಶಕ್ತಿಯನ್ನೂ ಉಪಯೋಗಿಸಿಕೊಂಡು





ತನ್ನ ದವಡೆಗಳನ್ನು ಭದ್ರವಾಗಿ ಕಚ್ಚಿ ಹಿಡಿದಿತ್ತು. ಇಷ್ಟೆಲ್ಲ ಕಷ್ಟವಾಗಿದ್ದರೂ ಅದು ಬೇಗನೆಯೇ ಈ ವಿಚಿತ್ರ ಪರಿಸ್ಥಿತಿಗೆ ಹೊಂದಿಕೊಂಡಿತು, ತನ್ನ ಸುತ್ತಮುತ್ತ ಎಲ್ಲ ನೋಡತೊಡಗಿತು. ಕಡ್ಡಿಯಿಂದ ತೂಗಿಬಿದ್ದಿದ್ದ ಅದಕ್ಕೆ ಕೆಳಗೆ ಬೇಗ ಬೇಗ ಸರಿದು ಹೋಗುತ್ತಿದ್ದ ಹೊಲಗಳೂ ಹುಲ್ಲುಗಾವಲುಗಳೂ ನದಿಗಳೂ ಬೆಟ್ಟಗುಡ್ಡಗಳೂ ಅಷ್ಟು ಚೆನ್ನಾಗಿ ಕಾಣುತ್ತಿರಲಿಲ್ಲ. ಆದರೆ ಅದಕ್ಕೆ ಹಿಂದೆ ಹಾಗೂ ಸ್ವಲ್ಪ ಮೇಲೆ ನೋಡಲು ಸಾಧ್ಯವಿತ್ತು. ಅಷ್ಟರಿಂದಲೇ ಅದಕ್ಕೆ ಹೆಮ್ಮೆ, ಸಂತೋಷ.

"ಎಂಥ ಒಳ್ಳೆಯ ಉಪಾಯ ಹುಡುಕಿದೆ. ನಾನು ಭಾರಿ ಬುದ್ಧಿಶಾಲಿಯಲ್ಲವೇ !" ಅದು ತನಗೆ ತಾನೇ ಹೇಳಿಕೊಂಡಿತು.

ಈ ಮಧ್ಯೆ, ಮುಂದೆ ಹೋಗುತ್ತಿದ್ದ ಜೊತೆ ಬಾತುಕೋಳಿಗಳ ಹಿಂದೆ ಹಾರಿ ಹೋಗುತ್ತಿದ್ದ ಉಳಿದ ಬಾತುಕೋಳಿಗಳು ಗಟ್ಟಿಯಾಗಿ ಕೂಗುತ್ತ ಕಪ್ಪೆಯನ್ನು ಹೊಗಳುತ್ತಿದ್ದವು.

"ನಮ್ಮ ಕಪ್ಪೆ ತುಂಬ ಬುದ್ಧಿಶಾಲಿಯೇ ಸರಿ," ಅವು ಹೇಳಿದವು. "ಬಾತುಕೋಳಿಗಳ ಮಧ್ಯೆಯೂ ಇಷ್ಟು ಬುದ್ಧಿಶಾಲಿಯಾದವು ಹೆಚ್ಚಿಗಿಲ್ಲ !"

ಕಪ್ಪೆ ಈ ಹೊಗಳಿಕೆಗೆ ಅವನ್ನು ವಂದಿಸ ಬಯಸಿತು. ಆದರೆ ಬಾಯಿ ತೆರೆದರೆ ಆ ಭಾರಿ ಎತ್ತರದಿಂದ ಬಿದ್ದು ಹೋಗುವೆನೆಂಬುದನ್ನು ಸಕಾಲದಲ್ಲೇ ನೆನಪಿಸಿಕೊಂಡು ಅದು ತನ್ನ ದವಡೆಗಳನ್ನು ಇನ್ನೂ ಹೆಚ್ಚು ಬಿಗಿಯಾಗಿ ಕಚ್ಚಿ ಹಿಡಿದಿರಿಸಿ, ಮೌನದಿಂದಿದ್ದಿತು. ಹಾಗೆಯೇ ಅದು ಇಡೀ ದಿನ ತೂಗಾಡುತ್ತ ಇದ್ದಿತು. ಬಾತುಕೋಳಿಗಳು ಹಾರುತ್ತಿದ್ದಾಗಲೇ ಸರದಿ ಬದಲಾಯಿಸಿಕೊಳ್ಳುತ್ತಿದ್ದವು, ಬಹು ಜಾಣ್ಮೆಯಿಂದ ಕಡ್ಡಿಯನ್ನು ಮುಂದಿನ ಸರದಿಯ ಜೊತೆ ಬಾತುಕೋಳಿಗಳಿಗೆ ತಟಾಯಿಸುತ್ತಿದ್ದವು. ಆದರೆ ಅದು ಕಪ್ಪೆಗೆ ತುಂಬ ಭಯ ಹುಟ್ಟಿಸುತ್ತಿತ್ತು. ಅಂಥ



ಸಮಯದಲ್ಲಿ ಅದು ಹೆದರಿಕೆಯಿಂದ ಇನ್ನೇನು ಪಟಗುಟ್ಟಿ ಬಿಡುವುದರಲ್ಲಿತ್ತು. ಆದರೆ ಧೈರ್ಯದಿಂದಿರಬೇಕೆಂದು ಅದು ತಿಳಿದಿತ್ತು, ನಿಜಕ್ಕೂ ಧೈರ್ಯದಿಂದಿತ್ತು. ಸಂಜೆ ಬಾತುಕೋಳಿಗಳ ತಂಡವು ಯಾವುದೋ ಅಪರಿಚಿತ ಜೌಗು ಪ್ರದೇಶದಲ್ಲಿ ಇಳಿಯಿತು. ಅಲ್ಲೇ ಅವೆಲ್ಲ ರಾತ್ರಿಯನ್ನು ಕಳೆದವು. ಮುಂಜಾನೆಯಾಗುತ್ತಿದ್ದಂತೆ ಅವು ಮತ್ತೆ ಹೊರಟವು. ಆದರೆ ಈ ಬಾರಿ ಕಪ್ಪೆ ಹಿಂದೆ ಮಾಡಿದ್ದಂತೆ ಕಡ್ಡಿಯನ್ನು ಹಿಮ್ಮುಖವಾಗಿ ಕಚ್ಚಿ ಹಿಡಿಯದೆ ಮುಮ್ಮುಖವಾಗಿ ಕಚ್ಚಿ ಹಿಡಿಯಿತು. ಕೆಳಗೆ ಏನಿದ್ದಿತೆಂಬುದನ್ನು ಕಾಣಲು ಇದು ಹೆಚ್ಚು ಉತ್ತಮವಾಗಿದ್ದಿತು. ಬಾತುಕೋಳಿಗಳು ಸುಗ್ಗಿ ಕಟಾವು ಮಾಡಿದ್ದ ಹೊಲಗಳ ಮೇಲೆ, ಹಳದಿ ಬಣ್ಣದ ಕಾಡುಗಳ

ಮೇಲೆ ಮತ್ತು ಫಸಲನ್ನು ಬಣಬೆಗಳಲ್ಲಿ ಒಟ್ಟಿದ್ದ ಹಳ್ಳಿಗಳ ಮೇಲೆ ಹಾರಿಕೊಂಡು ಹೋದವು. ಜನ ಮಾತನಾಡಿಕೊಳ್ಳುತ್ತಿದ್ದುದೂ, ರೈಗೋಧಿಯನ್ನು ಒಕ್ಕುತ್ತಿದ್ದ ಬಡಿಗೋಲುಗಳ ಶಬ್ದವೂ ಅವಕ್ಕೆ ಕೇಳಿಬರುತ್ತಿದ್ದವು. ಜನ ಕೊರಳುಗಳನ್ನು ಮುಂದೂಡಿ ಬಾತುಕೋಳಿಗಳ ಹಿಂಡನ್ನು ನೋಡಿದರು, ಅಲ್ಲಿ ವಿಚಿತ್ರವಾದ ಏನನ್ನೋ ಕಂಡು ಆ ಕಡೆಗೆ ತಮ್ಮ ಕೈ ನೀಡಿ ತೋರಿಸುತ್ತಿದ್ದರು. ಕಪ್ಪೆಯು ನೆಲಕ್ಕೆ ಸಮೀಪವಾಗಿ ಕೆಳ ಮಟ್ಟದಲ್ಲಿ ಹಾರಿ ಹೋಗಲು ಬಯಸಿತು. ಜನ ತನ್ನನ್ನು ಕಂಡು ಏನು ಹೇಳುತ್ತಾರೆಂಬುದನ್ನು ಕೇಳಲು ಅದಕ್ಕೆ ಆಸೆ. ಮುಂದಿನ ಬಾರಿ ನಿಂತಾಗ ಅದು ಬಾತುಕೋಳಿಗಳಿಗೆ ಹೇಳಿತು:

"ಸ್ವಲ್ಪ ಕೆಳ ಮಟ್ಟದಲ್ಲಿ ಹಾರಲು ಸಾಧ್ಯವಿಲ್ಲವೇ ? ತುಂಬ ಎತ್ತರದಲ್ಲಿ ಹಾರಿದರ ನನಗೆ ತಲೆ ತಿರುಗಿದಂತಾಗುತ್ತೆ. ಇದ್ದಕ್ಕಿದ್ದಂತೆ ನನ್ನ ಸ್ಥಿತಿ ಕೆಟ್ಟು ನಾನು ಬಿದ್ದು ಹೋಗಬಹುದು ಅಂತ ನನಗೆ ಹೆದರಿಕೆ."

ಕರುಣಾಳುಗಳಾದ ಬಾತುಕೋಳಿಗಳು ಒಪ್ಪಿದವು. ಅಷ್ಟು ಎತ್ತರದಲ್ಲಿ ಹಾರಿ ಹೋಗುವುದಿಲ್ಲ ಅಂತ ಮಾತು ಕೊಟ್ಟವು. ಮಾರನೆಯ ದಿನ ಅವು ಎಷ್ಟು ಕೆಳ ಮಟ್ಟದಲ್ಲಿ ಹಾರಿದವೆಂದರೆ, ನೆಲದ ಮೇಲೆ ಜನ ಆಡಿಕೊಳ್ಳುತ್ತಿದ್ದುದೆಲ್ಲ ಅವಕ್ಕೆ ಕೇಳಿಬರುತ್ತಿತ್ತು.

"ಅಲ್ಲಿ ನೋಡಿ, ಅಲ್ಲಿ ನೋಡಿ !" ಎಂದು ಹಳ್ಳಿಯೊಂದರಲ್ಲಿ ಮಕ್ಕಳು ಕೂಗಿ ಹೇಳಿದರು. "ಅಲ್ಲಿ ನೋಡಿ, ಬಾತುಕೋಳಿಗಳು ಕಪ್ಪೆಯನ್ನು ಕೊಂಡೊಯ್ಯುತ್ತಿವೆ !"

ಕಪ್ಪೆ ಅವರ ಮಾತು ಕೇಳಿಸಿಕೊಂಡಿತು. ಅದರ ಹೃದಯ ಆನಂದದಿಂದ ಹಿಗ್ಗಿತು.

"ಅಲ್ಲಿ ನೋಡಿ, ಅಲ್ಲಿ ನೋಡಿ !" ಮುಂದಿನ ಹಳ್ಳಿಯಲ್ಲಿ ಮಕ್ಕಳು ಕೂಗಿ ಹೇಳಿದರು. "ಇಂಥ ಆಶ್ಚರ್ಯವನ್ನು ನೀವೆಂದೂ ಖಂಡಿತ ನೋಡಿಲ್ಲ !"

"ಈ ಉಪಾಯವನ್ನು ನಾನೇ ಯೋಚಿಸಿದ್ದು, ಬಾತುಕೋಳಿಗಳಲ್ಲ, ಅನ್ನುವುದು ಅವರಿಗೆ ಗೊತ್ತಿದೆಯೋ ಇಲ್ಲವೋ" ಅಂತ ಕಪ್ಪೆ ಅಂದುಕೊಂಡಿತು.

"ಅಲ್ಲಿ ನೋಡಿ, ಅಲ್ಲಿ ನೋಡಿ !" ಎಂದು ಮೂರನೆಯ ಹಳ್ಳಿಯಲ್ಲೂ ಮಕ್ಕಳು ಕೂಗಿ ಹೇಳಿದರು. "ಆಶ್ಚರ್ಯ, ಆಶ್ಚರ್ಯ. ಯಾರು ಯೋಚಿಸಿದರೋ ಈ ಜಾಣತನದ ಉಪಾಯವನ್ನು !"

ಇನ್ನು ಕಪ್ಪೆಗೆ ಸುಮ್ಮನಿರಲು ಆಗಲಿಲ್ಲ. ಎಚ್ಚರಿಕೆಯನ್ನು ಮರೆತು ಗಟ್ಟಿಯಾಗಿ ಕೂಗಿ ಹೇಳಿತು:

"ನಾನೇ ಕಣ್ರೋ, ನಾನು ಯೋಚಿಸಿದ್ದು, ನಾನು ! ನಾನು !"

ಹೀಗೆ ಕೂಗಿತೋ ಇಲ್ಲವೋ ಅದು ರಭಸದಿಂದ ನೆಲಕ್ಕೆ ಬೀಳತೊಡಗಿತು. ಬಾತುಕೋಳಿಗಳು ಗಾಬರಿಯಿಂದ ಕಿರುಚಿಕೊಂಡವು. ಅವುಗಳಲ್ಲೊಂದು ಕಪ್ಪೆ ಬೀಳುತ್ತಿದ್ದಾಗಲೇ ಅದನ್ನು ಗಾಳಿಯಲ್ಲೇ ಕಚ್ಚಿ ಹಿಡಿಯಲು ಯತ್ನಿಸಿತು, ಆದರೆ ಸಾಧ್ಯವಾಗಲಿಲ್ಲ. ಕಪ್ಪೆಯು ತನ್ನೆಲ್ಲ ನಾಲ್ಕು ಕಾಲುಗಳನ್ನೂ ಚಾಚಿಕೊಂಡು ಶೀಘ್ರವಾಗಿ ಕೆಳಕ್ಕೆ ಬೀಳತೊಡಗಿತು. ಆದರೆ ಬಾತುಕೋಳಿಗಳು ತುಂಬ ವೇಗವಾಗಿ ಹಾರಿ ಹೋಗುತ್ತಿದ್ದುದರಿಂದ ಕಪ್ಪೆಯು ಎಲ್ಲಿ ಕಿರುಚಿತೋ ಅದಕ್ಕೆ ನೇರವಾಗಿ ಕೆಳಗಿದ್ದ ಗಟ್ಟಿ ನೆಲದ ಮೇಲೆ ಬೀಳದೆ, ಇನ್ನೂ ಸ್ವಲ್ಪ ಮುಂದೆ ಹೋಗಿ, ಹಳ್ಳಿಯ ಆಚೆ, ಅದೃಷ್ಟವಶಾತ್ ಒಂದು ದೊಡ್ಡ ಕೊಳಕಾದ ಕೊಳದೊಳಕ್ಕೆ ಡುಬುಕ್ಕನೆ ಬಿದ್ದಿತು.

ಅದು ಕೂಡಲೇ ತನ್ನ ತಲೆಯನ್ನು ನೀರಿನಿಂದ ಹೊರಕ್ಕೆ ಚಾಚಿ, ಉದ್ರಿಕ್ತವಾಗಿ ಗಟ್ಟಿಧ್ವನಿಯಲ್ಲಿ ಕೂಗಿ ಹೇಳಿತು:

"ಅದು ನಾನು ಯೋಚಿಸಿದ್ದು, ನಾನು ! ನಾನು !"

ಆದರೆ ಅದರ ಮಾತನ್ನು ಕೇಳಲು ಅಲ್ಲಿ ಯಾರೂ ಇರಲಿಲ್ಲ. ಅದು ಹಠಾತ್ತನೆ ನೀರಿನೊಳಕ್ಕೆ ಅಪ್ಪಳಿಸಿ ಬಿದ್ದುದರಿಂದ ಹೆದರಿದ್ದ ಆ ಕೊಳದಲ್ಲಿದ್ದ ಕಪ್ಪೆಗಳು ನೀರಿನೊಳಗೆ ಅಡಗಿ ಕುಳಿತಿದ್ದವು. ಈಗ ಅವು ಒಂದೊಂದಾಗಿ ಹೊರಗೆ ಕಾಣಿಸಿಕೊಳ್ಳತೊಡಗಿದವು. ಎಲ್ಲವೂ ಈ ಆಗಂತುಕ ಕಪ್ಪೆಯನ್ನೇ ದಿಟ್ಟಿಸಿ ನೋಡಿದವು.

"ನಾನು ಸಂಚಾರ ಹೋಗಬೇಕೂಂತ ಇಡೀ ಜೀವನ ಯೋಚಿಸುತ್ತಿದ್ದೆ, ಕೊನೆಗೂ ಒಂದು ಹೊಸ ಅಸಾಧಾರಣ ಪ್ರಯಾಣವಿಧಾನ ಹೊಳೆಯಿತು" ಅಂತ ಅದು ಇತರ ಕಪ್ಪೆಗಳಿಗೆ ವಿವರಿಸಿ ತಿಳಿಸಿತು. "ನನ್ನ ಬಳಿ



ನನ್ನ ಸ್ವಂತ ಬಾತುಕೋಳಿಗಳಿವೆ. ಅವು ನನ್ನನ್ನು ಎಲ್ಲಿಗೆ ಬೇಕಾದರೂ ಕೊಂಡೊಯ್ಯುತ್ತವೆ. ನಾನು ಈಗಷ್ಟೆ ದಕ್ಷಿಣ ಪ್ರಾಂತಕ್ಕೆ ಹೋಗಿದ್ದೆ. ಅಲ್ಲಿ ಎಲ್ಲ ಎಷ್ಟು ಸೊಗಸಾಗಿದೆ ಅಂತೀರ. ಜೌಗು ಪ್ರದೇಶಗಳು ತುಂಬ ಸುಂದರವಾಗಿವೆ, ಬೆಚ್ಚಗಿವೆ. ಅಲ್ಲಿ ಸೊಳ್ಳೆಗಳೂ ತರಹೇವಾರಿ ರುಚಿರುಚಿಯಾದ ಕೀಟಗಳೂ ಬೇಕಾದಷ್ಟಿವೆ, ಮೋಡಗಳಂತೆ ಮುತ್ತಿರುತ್ತವೆ" ಅಂತ ತಿಳಿಸಿತು.

"ಇಲ್ಲಿ ನೀವೆಲ್ಲ ಹೇಗಿದ್ದೀರಿ ಅಂತ ನೋಡಿಕೊಂಡು ಹೋಗೋಣ ಅಂತ ಬಂದೆ" ಅದು ಹೇಳಿತು. "ವಸಂತ ಕಾಲದವರೆಗೂ ನಾನು ಇಲ್ಲೇ ಇರ್ತೇನೆ. ಆಮೇಲೆ ನನ್ನ ಬಾತುಕೋಳಿಗಳು ನನ್ನ ಬಳಿಗೆ ಬರುತ್ತವೆ. ಅವುಗಳಿಗೂ ನೋಡಿ, ಹಾರಿ ಹಾರಿ ಸುಸ್ತಾಗಿರುತ್ತೆ. ಅದಕ್ಕೇ ಈಗ ಸುಮ್ಮನೆ ಬಿಟ್ಟುಕೊಟ್ಟಿದ್ದೇನೆ. ಅವು ಬಂದ ಮೇಲೆ ಇಲ್ಲಿಂದ ಮತ್ತೆ ನನ್ನ ಪಯಣ."

ಆದರೆ ಬಾತುಕೋಳಿಗಳು ಅಲ್ಲಿಗೆ ಎಂದೂ ಬರಲೇ ಇಲ್ಲ. ಕಪ್ಪೆ ಗಟ್ಟಿ ನೆಲದ ಮೇಲೆ ಬಿದ್ದು ನಜ್ಜುಗುಜ್ಜಾಗಿದ್ದಿತೆಂದೇ ಅವು ಭಾವಿಸಿದ್ದವು. ಕಪ್ಪೆಯ ದುರ್ಗತಿಗಾಗಿ ಅವು ಮರುಗಿದ್ದವು.

